





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. (ಸಂದೇಶವಾಹಕರೇ) ಓದಿರಿ, ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದೊಂದಿಗೆ.

اِقْرَاْ بِاسْمِ رَبِّكَ الَّذِيْ خَلَقَ ﴿١﴾

2. ಅವನು, ಹೆಪ್ಪುಗಟ್ಟಿದ ರಕ್ತದ ಒಂದು ಪಿಂಡದಿಂದ ಮಾನವನನ್ನು ಸೃಷ್ಟಿಸಿದನು.

خَلَقَ الْاِنْسَانَ مِنْ عَلَقٍ ﴿٢﴾

3. ಓದಿರಿ, ಮತ್ತು ನಿಮ್ಮ ಪ್ರಭು ಮಹಾ ಉದಾರಿ-

اِقْرَاْ وَرَبُّكَ الْاَكْرَمُ ﴿٣﴾

4. ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು-

الَّذِيْ عَلَّمَ بِالْقَلَمِ ﴿٤﴾

5. ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯಪಾಲಿಸಿದನು.[1]

عَلَّمَ الْاِنْسَانَ مَا لَمْ يَعْلَمْ ﴿٥﴾

6. ಸರ್ವಥಾ ಅಲ್ಲ![2] ಮಾನವನು ವಿದ್ರೋಹವೆಸಗುತ್ತಾನೆ-

كَلَّآ اِنَّ الْاِنْسَانَ لَيَطْغٰىٓ ﴿٦﴾

7. ತನ್ನನ್ನು ಸರ್ವಸ್ವತಂತ್ರನೆಂದು ಕಂಡು.

اَنْ رَّاٰهُ اسْتَغْنٰى ﴿٧﴾

8. (ವಸ್ತುತಃ ಅವನಿಗೆ) ನಿನ್ನ ಪ್ರಭುವಿನ ಕಡೆಗೇ ಖಂಡಿತ ಮರಳಬೇಕಾಗಿದೆ.

اِنَّ اِلٰى رَبِّكَ الرُّجْعٰى ﴿٨﴾

9-10. ಒಬ್ಬ ದಾಸನು ನಮಾಝ್ ಮಾಡುತ್ತಿರುವಾಗ ಅವನನ್ನು ತಡೆಯುವ ವ್ಯಕ್ತಿಯನ್ನು ನೀವು ಕಂಡಿರಾ?

اَرَءَيْتَ الَّذِيْ يَنْهٰى ﴿٩﴾
عَبْدًا اِذَا صَلّٰى ﴿١٠﴾

1. ಇದು ಪ್ರವಾದಿವರ್ಯರ(ಸ) ಮೇಲೆ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ಪ್ರಪ್ರಥಮ ವಾಣಿಯಾಗಿದೆ.
2. ಅವರು ಪ್ರವಾದಿತ್ವದ ಪದವಿಗೆ ನಿಯೋಗಿಸಲ್ಪಟ್ಟ ನಂತರ ಹರಮ್‌ನಲ್ಲಿ ನಮಾಝ್ ಮಾಡಲಿಚ್ಛಿಸಿದಾಗ ಅಬೂಜಹಲ್ ಅವರನ್ನು ತಡೆಯ ಬಯಸಿದ ಸಂದರ್ಭದಲ್ಲಿ ಈ ಸೂಕ್ತಗಳು ಅವತೀರ್ಣಗೊಂಡವು.

11. ನಿಮ್ಮ ಅಭಿಪ್ರಾಯವೇನು? (ಆ ದಾಸನು) ಸನ್ಮಾರ್ಗದಲ್ಲಿದ್ದರೆ-

أَرَءَيْتَ إِن كَانَ عَلَى ٱلْهُدَىٰٓ ۝١١

12. ಅಥವಾ ಧರ್ಮನಿಷ್ಠೆಯ ಉಪದೇಶ ನೀಡುತ್ತಿದ್ದರೆ?

أَوْ أَمَرَ بِٱلتَّقْوَىٰٓ ۝١٢

13. (ತಡೆಯುವವನಾದ ಈ ವ್ಯಕ್ತಿಯು ಸತ್ಯವನ್ನು) ತಿರಸ್ಕರಿಸುವವನೂ ವಿಮುಖನಾಗುವವನೂ ಆಗಿದ್ದರೆ, ನಿಮ್ಮ ಅಭಿಪ್ರಾಯವೇನು?

أَرَءَيْتَ إِن كَذَّبَ وَتَوَلَّىٰٓ ۝١٣

14. ಅಲ್ಲಾಹನು ನೋಡುತ್ತಿದ್ದಾನೆಂಬುದನ್ನು ಅವನು ತಿಳಿದಿಲ್ಲವೇ?

أَلَمْ يَعْلَم بِأَنَّ ٱللَّهَ يَرَىٰ ۝١٤

15. ಖಂಡಿತ ಅಲ್ಲ! ಅವನು (ತನ್ನ ನಿಲುವನ್ನು) ತೊರೆಯದಿದ್ದರೆ ನಾವು ಅವನ ಜುಟ್ಟನ್ನು ಹಿಡಿದು ಎಳೆಯುವೆವು.

كَلَّا لَئِن لَّمْ يَنتَهِ لَنَسْفَعًۢا بِٱلنَّاصِيَةِ ۝١٥

16. ಸುಳ್ಳುಗಾರ ಹಾಗೂ ಮಹಾ ಅಪರಾಧಿ ಜುಟ್ಟನ್ನು.

نَاصِيَةٍ كَٰذِبَةٍ خَاطِئَةٍ ۝١٦

17. ಅವನು ತನ್ನ ಬೆಂಬಲಿಗರ ಹಿಂಡನ್ನು ಕರೆದುಕೊಳ್ಳಲಿ-

فَلْيَدْعُ نَادِيَهُۥ ۝١٧

18. ನಾವೂ ಯಾತನೆ ನೀಡುವ ದೇವಚರರನ್ನು ಕರೆಸಿಕೊಳ್ಳುವೆವು-

سَنَدْعُ ٱلزَّبَانِيَةَ ۝١٨

19. ಖಂಡಿತ ಅಲ್ಲ! ಅವನ ಮಾತನ್ನು ಅನುಸರಿಸಬೇಡಿರಿ, ಸಾಷ್ಟಾಂಗ ವೆರಗಿರಿ ಮತ್ತು (ನಿಮ್ಮ ಪ್ರಭುವಿನ) ಸಾಮೀಪ್ಯ ಪಡೆಯಿರಿ.

كَلَّا لَا تُطِعْهُ وَٱسْجُدْ وَٱقْتَرِب ۩ ۝١٩

---